

ಬಾ ಮತ್ತು ಬಾಪು
150ನೇ ಜನ್ಮ ವರ್ಷಾಚರಣೆ
ಪುಸ್ತಕ ಮಾಲಿಕೆ

# ಸಮಾಜವಾದ :
# ಗಾಂಧೀ ದೃಷ್ಟಿಕೋನ

ಡಾ. ವೂಡೇ ಪಿ. ಕೃಷ್ಣ

ಕನ್ನಡಕ್ಕೆ : ಡಾ. ಎನ್. ಗೋಪಾಲಕೃಷ್ಣ

ಬಾ-ಬಾಪು 150ನೇ




ವರ್ಷಾಚರಣೆ ಪುಸ್ತಕ ಮಾಲಿಕೆ

# ಸಮಾಜವಾದ : ಗಾಂಧೀ ದೃಷ್ಟಿಕೋನ

ಡಾ. ವೂಡೇ ಪಿ. ಕೃಷ್ಣ

ಕನ್ನಡಕ್ಕೆ : ಡಾ.ಎನ್. ಗೋಪಾಲಕೃಷ್ಣ

ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967

ಸಮಾಜವಾದ : ಗಾಂಧೀ ದೃಷ್ಟಿಕೋನ
ಲೇಖಕರು : ಡಾ. ವೂಡೇ ಪಿ. ಕೃಷ್ಣ
ಕನ್ನಡಕ್ಕೆ ಅನುವಾದ ಡಾ. ಎನ್. ಗೋಪಾಲಕೃಷ್ಣ
ಪ್ರಕಾಶಕರು : ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560001, ದೂರವಾಣಿ : 080–22261967

ಮೊದಲ ಮುದ್ರಣ : 2019

ಪ್ರತಿಗಳು : 1000

ಪುಟಗಳು : XVI + 268

ಬೆಲೆ : 15/–

ಮುದ್ರಕರು : ಕ್ರಿಯೇಟಿವ್‌ಗೀಕ್ಸ್
ಯಾದವ ಕಾಲೇಜು ರಸ್ತೆ, ಮಾಧವನಗರ
ಬೆಂಗಳೂರು – 560001
ದೂರವಾಣಿ : 080 40927049



# ಅರ್ಪಣೆ

ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಮಾಜಿ ಅಧ್ಯಕ್ಷರಾದ

**ಶ್ರೀ ಕಡಿದಾಳ್ ಮಂಜಪ್ಪ** ಅವರಿಗೆ

ಗೌರವಪೂರ್ವಕವಾಗಿ



ಭಾರತೀಯರಲ್ಲಿ ತೀರ ನಿರ್ಗತಿಕರಾದವರ ದುಃಖವು ನನ್ನ ದುಃಖವಾಗಿರಲಿ. ಹಾಗೆಯೇ ಜಗತ್ತಿನಲ್ಲಿ ನನ್ನ ಅಧಿಕಾರವು ಎಲ್ಲರ ಅಧಿಕಾರಕ್ಕಿಂತಲೂ ಕನಿಷ್ಠವಾದದ್ದಾಗಿರಲಿ. ನನ್ನ ಆರೈಕೆಗೆ ಒಳಗಾದ ದೀನದರಿದ್ರರ ಪಾಪಗಳು ನನ್ನ ಪಾಪಗಳಾಗಲಿ. ಹೀಗೆ ವಿನಮ್ರತೆಯಿಂದ ಬಾಳುತ್ತ ನಾನು ಒಂದು ದಿನ ದೇವರನ್ನು –ಸತ್ಯವನ್ನು–ಮುಖಾಮುಖಿಯಾಗಿ ಕಾಣಲು ಆಶಿಸುತ್ತೇನೆ.

– ಮಹಾತ್ಮ ಗಾಂಧೀ

# ಮುನ್ನುಡಿ

ಗಾಂಧೀಜಿ ಅವರ ಬದುಕು ರೋಚಕ. ಅದೊಂದು ತೆರೆದ ಪುಸ್ತಕವೂ ಹೌದು. ಶತಮಾನದ ಹಿಂದೆಯೇ ನಮಗೆ ಅದನ್ನು ಪರಿಚಯಿಸಿತ್ತು. ಹೊರಗೊಂದು ಒಳಗೊಂದು ಎಂಬುದಂತೂ ಇಲ್ಲ. ಇಡೀ ಪ್ರಪಂಚ ದೊಡ್ಡ ಕಾರ್ಖಾನೆಗಳತ್ತ ದಾಪುಗಾಲು ಹಾಕುವಾಗ ಮನುಷ್ಯ ಚಾಲಿತ ಚರಕಕ್ಕೆ ನಮ್ಮನ್ನು ಸೆಳೆದರು. Mass Production ಎಂದರೆ Production by the Masses ಎಂದರು. ರಫ್ತಿನ ಹೆಸರಿನಲ್ಲಿ ದೇಶವನ್ನು ಮಾರುತ್ತಿದ್ದ ಸರ್ಕಾರಕ್ಕೆ ಅದಿರು, ಹತ್ತಿ ಮತ್ತು ಚರ್ಮವನ್ನು ರಫ್ತು ಮಾಡುವುದನ್ನು ವಿರೋಧಿಸಿ ಉದ್ಯೋಗ ಸೃಷ್ಟಿಸುವ ಕಚ್ಚಾ ವಸ್ತುಗಳನ್ನು ಎಂದಿಗೂ ರಫ್ತು ಮಾಡಬಾರದೆಂದರು. ನಿರುದ್ಯೋಗ ನಿವಾರಣೆಗೆ ಇಂದಿಗೂ ಅದೇ ನಮಗಿರುವ ಪರಿಹಾರ. ಅವರ ಆರ್ಥಿಕ ಚಿಂತನೆಗಳು ವಿಭಿನ್ನ. ಭಾರತಕ್ಕೆ ಹೇಳಿ ಮಾಡಿಸಿದ ಸಿದ್ಧೌಶದ. ಅವರ ಸಮಾಜವಾದೀ ಚಿಂತನೆಗಳನ್ನು ಸರಳ ಭಾಷೆಯಲ್ಲಿ ಪರಿಚಯಿಸುವ ಪ್ರಯತ್ನವೇ ಡಾ. ವುಡೇ ಪಿ. ಕೃಷ್ಣ ಅವರ ಈ ಪುಸ್ತಕ.

ಲಕ್ಷಾಂತರ ಪುಸ್ತಕಗಳು ಗಾಂಧೀಜಿ ಅವರ ಚಿಂತನೆಗಳ ಬಗ್ಗೆ ಎಲ್ಲ ಭಾಷೆಗಳಲ್ಲೂ ಪ್ರಕಟವಾಗಿವೆ. ಅಗಾಧವಾದ ಕಾಗದವನ್ನು ನದಿಗಳನ್ನು ತುಂಬುವಷ್ಟು ಶಾಯಿ ನುಂಗಿವೆ. ಕಪಾಟುಗಳು ಮಾತ್ರವಲ್ಲ ಇಡೀ ಗ್ರಂಥಾಲಯಗಳೇ ಗಾಂಧೀಜಿಯ ಬಗ್ಗೆ ಬರೆದ ಪುಸ್ತಕಗಳಿಂದ ತುಂಬಿ ಹೋಗಿವೆ. ಅಂಥಹ ಸನ್ನಿವೇಶದಲ್ಲಿ ಇನ್ನೊಂದು ಪುಸ್ತಕವೇಕೆ? ಅದರಲ್ಲೂ ಉದ್ದಾಮ ಪಂಡಿತರೂ, ಅತಿರಥ ಮಹಾರಥ ಸಾಹಿತಿಗಳೇ ಬರೆದಿರುವಾಗ ಈ ಎಂಜಿನಿಯರ್ ಬರೆದ ಪುಸ್ತಕ ಏಕೆ ಓದಬೇಕು? ಈ ಪ್ರಶ್ನೆಗಳನ್ನು ಅನಾಮತ್ತಾಗಿ ಸರಿಸುತ್ತಾ ಓದಿಸಿಕೊಂಡು ಹೋಗುತ್ತದೆ ಈ ಪುಸ್ತಕ. ಪುಸ್ತಕ ಕೈಗೆತ್ತಿಕೊಂಡ ಮೇಲೆ ಮುಗಿಸುವವರೆಗೂ

ಕೆಳಗಿಡಲು ಮನಸ್ಸಾಗುವುದಿಲ್ಲ. ಸರಳ ಪದಪುಂಜಗಳ ಮೂಲಕ ಕಠಿಣ ಆರ್ಥಿಕ ವಿಚಾರಗಳನ್ನು ಪಂಡಿತರೂ, ಪಾಮರರೂ ತಲೆದೂಗುವಂತೆ ಗಾಂಧೀಜಿ ಅವರ ಚಿಂತನೆಗಳನ್ನು ನಮ್ಮ ಮುಂದೆ ತೆರೆದಿಟ್ಟಿದೆ ಈ ಪುಸ್ತಕ. ವಿದ್ಯುನ್ಮಾನದ ಭರಾಟೆಯಲ್ಲಿ ಸ್ಮಾರ್ಟ್ ಫೋನ್‌ಗಳು ಮತ್ತು ಸೋಶಿಯಲ್ ಮೀಡಿಯಾಗಳ ಹಾವಳಿಯಿಂದ ಓದುವ ಅಭ್ಯಾಸವೇ ಕಳೆದು ಹೋಗುತ್ತಿರುವಾಗ ಎಂತಹ busy shedule ನಲ್ಲೂ ಓದಿಸಿಕೊಂಡು ಹೋಗುತ್ತದೆ ಈ ಕಿರುಹೊತ್ತಿಗೆ. ಖಚಿತತೆ, ನಿಖರತೆ ಮತ್ತು ಅಡಕ ಮಾಡಿರುವ ವಿಷಯ ಈ ಪುಸ್ತಕದ ವಿಶೇಷತೆ. ಈ ಸಾಧನೆಗೆ ಡಾ. ಕೃಷ್ಣ ಅವರು ಅಭಿನಂದನಾರ್ಹರು.

ನನ್ನ ಅಭಿಪ್ರಾಯದಲ್ಲಿ ಗಾಂಧೀಜಿ ಅವರ ಸಮಾಜವಾದೀ ಚಿಂತನೆಗಳಲ್ಲೆಲ್ಲಾ ವ್ಯಕ್ತಿಮೂಲ ಸಮಾನತೆ, ಅಸ್ಪೃಶ್ಯತೆ ಮತ್ತು ಜಾತಿ ವಿರುದ್ಧ ಗಾಂಧೀಜಿ ಅವರ ಹೋರಾಟ ಒಂದು ಕ್ರಾಂತಿಕಾರೀ ಬದುಕು. ಮೊದಲನೆಯ ದುಂಡು ಮೇಜಿನ ಸಭೆ ಲಂಡನ್‌ನಲ್ಲಿ 1930ರ ನವೆಂಬರ್‌ನಲ್ಲಿ ನಡೆದಾಗ ಗಾಂಧೀಜಿ ಅದನ್ನು ಬಹಿಷ್ಕರಿಸಿದ್ದರು. ದಲಿತ ವರ್ಗಗಳ ರಾಯಭಾರಿಯಾಗಿದ್ದ ಅಂಬೇಡ್ಕರ್ ತಮ್ಮ ಪ್ರಚಂಡ ಭಾಷಣದ ಮೂಲಕ ವಿಶ್ವದ ಗಮನ ಸೆಳೆದಿದ್ದರು. ಅದುವರೆಗೆ Deprevied Classes ಬಗ್ಗೆ ಅಪಾರ ಕಾಳಜಿ ಇರುವ ಒಬ್ಬ ಬ್ರಾಹ್ಮಣ ಎಂದು ಅಂಬೇಡ್ಕರ್ ಅವರನ್ನು ತಿಳಿದಿದ್ದ ಗಾಂಧೀಜಿ ದಿ.06.08.1931ರಂದು ಮುಂಬೈಯಲ್ಲಿ ಬಂದು ಭೇಟಿ ಮಾಡುವುದಾಗಿ ತಿಳಿಸಿದರು. ಆಗ ಅಂಬೇಡ್ಕರ್ ತಾವು ಹೋಗಿ ಗಾಂಧೀಜಿ ಅವರನ್ನು ಭೇಟಿಯಾದಾಗ ನಡೆದ ಮಹತ್ತರ ಚರ್ಚೆ ಗಾಂಧೀಜಿ ಅವರನ್ನು ಸಂಪೂರ್ಣವಾಗಿ ಬದಲಾಯಿಸಿ ಬಿಟ್ಟಿತು. ಜಾತಿ ಬಗ್ಗೆ ಅವರ ನಿಲುವುಗಳು ನಿರಂತರವಾಗಿ ಬದಲಾಗಿದ್ದಕ್ಕೆ ಹಲವು ನಿದರ್ಶನಗಳು ಹೀಗಿವೆ.

1932 ಆಶ್ರಮದಲ್ಲಿ ಸ್ವಜಾತಿ ಮದುವೆಗಳಿಗೆ ಇತಿಶ್ರೀ ಹಾಡಿ ಅಂತರ್ಜಾತೀಯ ಮದುವೆಗಳಿಗೆ ಪ್ರೋತ್ಸಾಹ.

1933 ಅಂತರ್ಜಾತಿ ವಿವಾಹ ಮತ್ತು ಸಹಪಂಕ್ತಿ ಭೋಜನದ ಆಲೋಚನೆ

1935 ಯಾರ ಜೊತೆಯಲ್ಲಿ ಊಟ, ಮದುವೆ ಎನ್ನುವ ಸ್ವಾತಂತ್ರವನ್ನು ಗಂಡು ಮತ್ತು ಹೆಣ್ಣುಗಳ ಮುಕ್ತ ಆಯ್ಕೆಗೆ ಬಿಡಬೇಕೆಂದು ಘೋಷಣೆ.

1936 ಬಾಲ್ಯವಿವಾಹವನ್ನು ಪೈಶಾಚಿಕ ಎಂದು ಖಂಡಿಸಿದ್ದು

1937 ವಲ್ಲಭಬಾಯಿ ಪಟೇಲರಿಗೆ ಸೂಚನೆ : ನೀವು ಹರಿಜನ ಜೊತೆ ಸಹಭೋಜನ, ಅಂತರ್ಜಾತಿ ವಿವಾಹಗಳನ್ನು ಕೈಗೊಳ್ಳುವ ತನಕ ಮುಂದುವರಿಯಬೇಕು... ನಿಮ್ಮ ಮಕ್ಕಳ ಮೇಲೆ ಒತ್ತಡ ಹಾಕಬಾರದು... ಸಹ ಪಂಕ್ತಿ ಭೋಜನದ ವಿಷಯದಲ್ಲಿ ನಿಮ್ಮ ತಾಯಿ ನಿಮ್ಮಿಂದ ದೂರವಾದರೂ ಸರಿ.

1940 ದಲಿತ ಹೆಣ್ಣು ಮದುವೆಯಾದ ಮೇಲ್ಜಾತಿಯ ಯುವಕರನ್ನು ಸಮರ್ಥನೆ ಮಾಡಿದ್ದು. ಇತರ ತರುಣರೂ ಅದೇ ಮಾದರಿಯನ್ನು ಅನುಸರಿಸಬೇಕೆಂದು ಪ್ರೇರೇಪಣೆ.

1944 ಗೋರಾ ಮಗಳು ಮನೋರಮಾ ದಲಿತ ಯುವಕನ ಮದುವೆಯ ಸಂದರ್ಭದಲ್ಲಿ ಆಶೀರ್ವಾದ.

1946 ಸ್ವಜಾತಿ ಮದುವೆಗಳಿಗೆ ಬಹಿಷ್ಕಾರ, ದಲಿತ ಮತ್ತು ಸರಳ ಹಿಂದೂ ಅಂತರ್ಜಾತಿ ವಿವಾಹಕ್ಕೆ ಮಾತ್ರ ಹೋಗುವುದಾಗಿ ಘೋಷಣೆ. ನನ್ನ ಪ್ರಭಾವಕ್ಕೆ ಬಂದ ಎಲ್ಲ ಸವರ್ಣ ಹಿಂದೂ ಮಹಿಳೆಯರಿಗೆ ದಲಿತರನ್ನೇ ಜೀವನ ಸಂಗಾತಿಯಾಗಿ ಆಯ್ಕೆ ಮಾಡುವಂತೆ ಮನ ಒಲಿಸಿದ್ದು.

1946 ಗೋರಾನಿಗೆ (ಅಳಿಯನಿಗೆ) ಆಶೀರ್ವಾದ, "ನೀನು ಅಂಬೇಡ್ಕರ್ ಹಾಗಗಬೇಕು, ಅಸ್ಪೃಶ್ಯತೆ ಹಾಗೂ ಜಾತಿ ನಿರ್ಮೂಲನಕ್ಕಾಗಿ ಕೆಲಸ ಮಾಡು.

1946 ನನ್ನ ಮನಸ್ಸು ಸತತವಾಗಿ ಬೆಳೆಯುತ್ತಿದೆ, ಸತತವಾಗಿ ಮುಂದೆ ಚಲಿಸುತ್ತಿದೆ. ನಾನು 125 ವರ್ಷ ಬದುಕಿದರೆ, ಇಡೀ ಹಿಂದೂ ಸಮಾಜವನ್ನು ನನ್ನ ಅಭಿಪ್ರಾಯಕ್ಕೆ ಹೊಂದುವಂತೆ ಪರಿವರ್ತಿಸಬಹುದು.

ವರ್ಗ ಮತ್ತು ಜಾತಿಗಳ ಎಲ್ಲ ಭೇದಗಳನ್ನು ಇಲ್ಲವಾಗಿ ಮಾಡಿದ್ದ Indian National Army, ಸುಭಾಷ್ ಚಂದ್ರ ಭೋಸರ ಮಹತ್ತರ ಹಾಗೂ ಚಿರಕಾಲಿಕ ಸಾಧನೆ ಎಂದು ಗಾಂಧೀಜಿ ಬಣ್ಣಿಸಿದ್ದರು.

1947 ಸಾಕುಮಗಳು ಅಭಾಳ ಅಂತರ್ಜಾತಿ ವಿವಾಹಕ್ಕೆ ಅನುಮತಿ.

ಹೀಗೆ ಗಾಂಧೀಜಿ, ಅಂಬೇಡ್ಕರ್ ಭೇಟಿಯ ನಂತರ ಜಾತಿರಹಿತ ಸಮಾಜದತ್ತ ಗಂಭೀರ ನಿಲುವನ್ನು ವ್ಯಕ್ತಪಡಿಸುವುದರ ಮೂಲಕ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಡುಗಟ್ಟಿದ್ದ ಸಂಪ್ರದಾಯವಾದಿಗಳಿಗೆ ಸಂದೇಶ ಕೊಡುತ್ತಾ ಬಂದರು. ಈ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ಮತ್ತು ಪ್ರಕಟಣೆಗಳಿಗೆ ಡಾ. ಕೃಷ್ಣ ಅವರ ನೇತೃತ್ವದಲ್ಲಿ ಗಾಂಧಿ ಸ್ಮಾರಕ ನಿಧಿಯು ರಾಷ್ಟ್ರಕ್ಕೆ ಮಾದರಿಯಾಗಲೆಂದು ಹಾರೈಸುತ್ತೇನೆ.

ಗಾಂಧೀಜಿ ಅವರ ಬದುಕೇ ಮಾದರಿ, ಸಮಾಜವಾದಿ ಚಿಂತನೆಯ ಪುಸ್ತಕಕ್ಕೆ ಮುನ್ನುಡಿ ಬರೆಯುವಂತಹ ವಿಶೇಷ ಗೌರವ ಮಾಡಿಕೊಟ್ಟ ಲೇಖಕರಿಗೆ ಅಭಿನಂದಿಸುತ್ತ ಅವರ ಲೇಖನಿಯಿಂದ ಇನ್ನೂ ಹತ್ತಾರು ಕೃತಿಗಳು ಹೊರಬರುವುದೆಂಬ ಸದಾಶಯದ ಧನ್ಯವಾದಗಳು.

ಪ್ರೊ. ರವಿವರ್ಮಕುಮಾರ್

# ನಮ್ಮ ನಮ್ಮಲ್ಲಿ

ಬಾ ಮತ್ತು ಬಾಪು ಅವರ 150ನೇ ವರ್ಷಾಚರಣೆಯ ಸುಸಂದರ್ಭದಲ್ಲಿ, ಗಾಂಧೀಜಿ ಅವರ ಸಮಾಜವಾದದ ದೃಷ್ಟಿಕೋನದ ಕುರಿತ ಈ ಕೃತಿಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ. ವೂಡೇ ಪಿ. ಕೃಷ್ಣ ಅವರು ರಚಿಸಿದ್ದಾರೆ.

ಡಾ. ವೂಡೇ ಪಿ. ಕೃಷ್ಣ ಅವರ ಸರ್ವೋದಯ ತತ್ವದಲ್ಲಿನ ವಿಶ್ವಾಸ, ಸುಧೀರ್ಘ ಅಧ್ಯಯನ ಹಾಗೂ ಸಂಶೋಧನಾತ್ಮಕ ದೃಷ್ಟಿಕೋನದಿಂದ ಈ ಕೃತಿ ಹೊರಹೊಮ್ಮಿದೆ. ಮಹಾತ್ಮಾಜೀ ಅವರನ್ನು ಆರ್ಥಿಕ ಹಾಗೂ ಸಾಮಾಜಿಕ ಪರಿಕಲ್ಪನೆಯಲ್ಲಿ ಅರ್ಥೈಸಿಕೊಳ್ಳುತ್ತ ಈ ಕೃತಿ ಸಾಗಿರುವುದನ್ನು ನಾವು ಕಾಣಬಹುದು. ಗಾಂಧಿ ಅವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಹಿಂತಿರುಗಿದ ನಂತರದ ಅವರ ವ್ಯಕ್ತಿತ್ವ ವಿಕಾಸ ಹೊಂದಿದ ಪರಿ, ಅವರು ಜನಸಾಮಾನ್ಯನಂತೆ ಬದುಕಲು ಸಜ್ಜುಗೊಂಡ ಬಗೆ, ಸ್ವಾವಲಂಬನೆ, ಸಹಕಾರ, ತತ್ವಗಳನ್ನು ಆಶ್ರಮವಾಸದಿಂದ ಕಲಿಯುತ್ತಾ, ಕಲಿಸುತ್ತಾ ಮಾನವೀಯತೆಯ ಸಾಕಾರ ಸ್ವರೂಪವಾದ ಪ್ರತಿರೂಪವನ್ನು ಈ ಬರಹ ನಮಗೆ ಕಟ್ಟಿಕೊಡುತ್ತದೆ. ಅಹಿಂಸೆ, ಸಮಾನತೆ, ರಾಷ್ಟ್ರೀಕರಣ ಮತ್ತು ಪ್ರಜಾಪ್ರಭುತ್ವದ ವಿಷಯಗಳನ್ನು ಗಾಂಧಿ ಅವರ ಆಶಯಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಆದ್ದರಿಂದ ವರ್ತಮಾನದಲ್ಲಿ ಈ ಕೃತಿ ಗಾಂಧೀ ಕುರಿತಾಗಿ ವಿಭಿನ್ನ ದೃಷ್ಟಿಕೋನದಿಂದ ಓದುವ, ಗ್ರಹಿಸುವ ಮತ್ತು ಅರ್ಥೈಸಿಕೊಳ್ಳುವ ಮಾರ್ಗವನ್ನು ಸಾಮಾನ್ಯ ಓದುಗನಿಗೂ

ತಿಳಿಸಿಕೊಡುತ್ತದೆ. ಇಂಥಹ ಕೃತಿಯನ್ನು ಬರೆದು ಗಾಂಧಿ ಭವನದಿಂದ ಪ್ರಕಟಣೆಗೆ ಒದಗಿಸಿರುವ ಡಾ. ವೂಡೇ. ಪಿ. ಕೃಷ್ಣ ಇವರಿಗೆ ಗೌರವಪೂರ್ವ ನಮನಗಳು. ಈ ಕೃತಿಗೆ ಮುನ್ನುಡಿಯನ್ನು ಪ್ರೀತಿ–ವಿಶ್ವಾಸದಿಂದ ಬರೆದ ಪ್ರೊ ರವಿವರ್ಮಕುಮಾರ್, ಹಿರಿಯ ನ್ಯಾಯವಾದಿಗಳು ಹೇಳಿದ ಮಾತುಗಳು "ಸರಳ ಪದಪುಂಜಗಳ ಮೂಲಕ ಕಠಿಣ ಆರ್ಥಿಕ ವಿಚಾರಗಳನ್ನು ಪಂಡಿತರೂ, ಪಾಮರರೂ ತಲೆದೂಗುವಂತೆ ಗಾಂಧೀಜಿ ಅವರ ಚಿಂತನೆಗಳನ್ನು ನಮ್ಮ ಮುಂದೆ ತೆರೆದಿಟ್ಟಿದೆ ಈ ಪುಸ್ತಕ. ವಿದ್ಯುನ್ಮಾನದ ಭರಾಟೆಯಲ್ಲಿ ಸ್ಮಾರ್ಟ್ ಫೋನ್‌ಗಳು ಮತ್ತು ಸೋಶಿಯಲ್ ಮೀಡಿಯಾಗಳ ಹಾವಳಿಯಿಂದ ಓದುವ ಅಭ್ಯಾಸವೇ ಕಳೆದು ಹೋಗುತ್ತಿರುವಾಗ ಎಂತಹ busy shedule ನಲ್ಲೂ ಓದಿಸಿಕೊಂಡು ಹೋಗುತ್ತದೆ" ಎಂಬ ಮಾತನ್ನು ಕೃತಿಯ ಘನತೆಯನ್ನು ಇಮ್ಮಡಿಗೊಳಿಸುತ್ತದೆ. ಆದ್ದರಿಂದ ಇವರಿಗೆ ಕೃತಜ್ಞತೆಗಳು.

ಈ ಕೃತಿಯನ್ನು ಪ್ರಕಟಿಸಲು ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಎಲ್ಲಾ ಸದಸ್ಯರುಗಳಿಗೂ ಕೃತಜ್ಞತೆಗಳು ಸಲ್ಲುತ್ತವೆ. ಇದನ್ನು ಅಂದವಾಗಿ ಮುದ್ರಿಸಿದ ಕ್ರಿಯೇಟಿವ್‌ಗೀಕ್ಸ್‌ನ ಮಹೇಶ್ ಮತ್ತು ತಂಡಕ್ಕೆ ಆತ್ಮೀಯ ನಮನಗಳು.

ಇಂದಿರಾ ಕೃಷ್ಣಪ್ಪ
ಗೌ॥ ಕಾರ್ಯದರ್ಶಿ

# ಸಮಾಜವಾದ : ಗಾಂಧೀ ದೃಷ್ಟಿಕೋನ

ಇಪ್ಪತ್ತನೇ ಶತಮಾನದಲ್ಲಿ ಏಷ್ಯಾ ಖಂಡದ ಮಹಾಪುರುಷರಲ್ಲಿ ಒಬ್ಬರೆಂದು ಪರಿಗಣಿಸಲಾದ ಮಹಾತ್ಮ ಗಾಂಧೀ ಅವರಿಗೆ ಭಾರತದ ಬಗ್ಗೆ ಅನನ್ಯವಾದ ಕನಸಿತ್ತು. ಅವರು ಹೇಳತ್ತಿದ್ದುದು ಏನೆಂದರೆ ; ನಾನು ಎಂಥಹ ಇಂಡಿಯಾಗಾಗಿ ಶ್ರಮಿಸಬೇಕಾಗಿದೆ ಎಂದರೆ ಯಾವ ಇಂಡಿಯಾದಲ್ಲಿ ಕಡು ಬಡವರೂ, "ಇದು ಅವರ ದೇಶ" ಎಂಬ ಭಾವನೆ ಹೊಂದುವರೋ ಯಾವುದರಿಂದ ಅವರು ಪ್ರಬಲ ಧ್ವನಿಯಾಗಬಲ್ಲರೋ ಅಂಥಹ ಇಂಡಿಯಾದಲ್ಲಿ ಉಚ್ಛ ಮತ್ತು ನೀಚ ವರ್ಗ ಭೇದವಿಲ್ಲದ ಜನರಿರುವರೋ, ಯಾವ ಇಂಡಿಯಾದಲ್ಲಿ ಎಲ್ಲಾ ಜನ ಸಮುದಾಯಗಳು, ಪರಿಪೂರ್ಣ ಸೌಹಾರ್ದತೆಯಿಂದ ಬದುಕಲು ಸಾಧ್ಯವೋ, ಯಾವ ಇಂಡಿಯಾದಲ್ಲಿ, ಅಸ್ಪೃಶ್ಯತೆಯ ಶಾಪವಿರುವುದಿಲ್ಲವೋ, ಮದ್ಯಪಾನ - ಮಾದಕ ವಸ್ತುಗಳ ದುಶ್ಚಟಗಳಿರುವುದಿಲ್ಲವೋ, ಅಂಥಹ ಇಂಡಿಯಾದಲ್ಲಿ ಮಹಿಳೆಯರು, ಪುರುಷರಷ್ಟೇ ಸಮಾನವಾದ ಹಕ್ಕುಗಳನ್ನು ಅನುಭವಿಸುವರು. ಇದರಿಂದಾಗಿ ಉಳಿದ ಎಲ್ಲಾ ವಿಶ್ವದೊಂದಿಗೆ ನಾವು ಶಾಂತಿಯಿಂದ ಇರಬಹುದು. - ಇದು ನನ್ನ ಕನಸಿನ ಭಾರತ" ಎನ್ನುತ್ತಿದ್ದರು.

ಗಾಂಧೀಜಿ ಅವರು ತಮ್ಮ ಮನದಾಳವನ್ನು ಬಿಚ್ಚಿಟ್ಟ ಬಗ್ಗೆ ನಮಗೆ ದೊರೆಯುವ ಬಹಳ ಹಿಂದಿನ ಸಾಹಿತ್ಯ ಎಂದರೆ 1906ರಲ್ಲಿ ಅವರು

ಪ್ರಕಟಿಸಿದ 'ಹಿಂದ್ ಸ್ವರಾಜ್'. 'ಹಿಂದ್ ಸ್ವರಾಜ್‌ನಲ್ಲಿನ ಪ್ರಮುಖ ವಿಷಯವೆಂದರೆ ಗಾಂಧೀಜಿ ಅವರು ಮೊತ್ತ ಮೊದಲ ಬಾರಿಗೆ, "ನಮ್ಮ ಬೇಕುಗಳನ್ನು ಮಿತಿಯಲ್ಲಿಡುವ" ಬಗ್ಗೆ ಮಾತನಾಡಿದುದಾಗಿದೆ. ಅವರು ದಕ್ಷಿಣ ಆಫ್ರಿಕಾದಿಂದ 1914ರಲ್ಲಿ ಹಿಂತಿರುಗಿದ ಕೂಡಲೇ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರೀಯ ಹೋರಾಟವನ್ನು ಪ್ರಾರಂಭಿಸಿದರು. ಗಾಂಧೀಜಿ ಅವರ ಪ್ರಕಾರ ಸ್ವರಾಜ್ಯವೆಂದರೆ – ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ನೈತಿಕ ಸ್ವಾತಂತ್ರ್ಯವಾಗಿದೆ. 1947ರ ಆಗಸ್ಟ್ 15ರಂದು ನಾವು ಸಂಪೂರ್ಣವಾಗಿ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸೆದೆವು. ಆದರೆ ನಾವು ಇನ್ನೂ ಸಮಾಜಿಕ, ಆರ್ಥಿಕ ಮತ್ತು ನೈತಿಕ ಸ್ವಾತಂತ್ರ್ಯವನ್ನು ಪಡೆಯಬೇಕಾಗಿದೆ ಎಂದು ಆಲೋಚಿಸಿದ್ದರು.

ಗಾಂಧೀಜಿ ಅವರ ಜೀವನದ ಕಾರ್ಯಸೂಚಿಯ ಮುಖ್ಯಾಂಶವೆಂದರೆ ಬಡತನದ ವಿರುದ್ಧ ಹೋರಾಟ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿ ಅವರು ತಮ್ಮ ರಾಜಕೀಯ ಚಟುವಟಿಕೆಯ ಜೊತೆ ಜೊತೆಗೆ ತಮ್ಮ ಆರ್ಥಿಕ ಯೋಜನೆಗಳನ್ನೂ ಮುಂದಿಟ್ಟಿದ್ದರು. ಪ್ರಸಿದ್ಧ ಗಾಂಧೀ ಅರ್ಥಶಾಸ್ತ್ರಜ್ಞರಾದ ಜೆ.ಸಿ. ಕುಮಾರಪ್ಪನವರು ಗಾಂಧೀಜಿ ಅವರ ಸಂಪೂರ್ಣ ಆರ್ಥಿಕ ಯೋಜನೆಗಳನ್ನೊಳಗೊಂಡ "ಗಾಂಧೀ ಅರ್ಥಶಾಸ್ತ್ರ" ಎಂಬ ಹೊಸ ಪರಿಭಾಷೆಯನ್ನು ವಿಶ್ವಕ್ಕೆ ಪರಿಚಯಿಸಿದರು.

ತಮ್ಮ ರಾಜಕೀಯ ಗುರು ಗೋಪಾಲಕೃಷ್ಣ ಗೋಖಲೆ ಅವರ ಸಲಹೆಯ ಮೇರೆಗೆ ಗಾಂಧೀಜಿ ಅವರ ಮೂರನೇ ದರ್ಜೆಯ ರೈಲ್ವೇ ಪ್ರಯಾಣಿಕರಾಗಿ ಭಾರತಯಾತ್ರೆಯನ್ನು ಕೈಗೊಂಡರು. ಗೋಖಲೆ ಅವರು, "ಜನರ ಬಳಿಗೆ ಹೋಗಿ; ಅವರನ್ನು ತಿಳಿದುಕೊಳ್ಳಿ; ಅವರನ್ನು ಪ್ರೀತಿಸಿ,

ಅವರೊಡನೆ ದುಡಿಯಿರಿ". ಎಂಬ ಈ ಸಂದೇಶದೊಡನೆ ಗಾಂಧೀಜಿ ಭಾರತಯಾತ್ರೆಯನ್ನು ಪ್ರಾರಂಭಿಸಿದರು. ಇದರಿಂದ ಅವರು ಭಾರತದ ಶರೀರ, ಮನಸ್ಸು ಮತ್ತು ಆತ್ಮಗಳನ್ನು ಸ್ಪಷ್ಟವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಯಿತು. ತನ್ನ ಕಾಲದ ಸಾಮಾಜಿಕ, ಆರ್ಥಿಕ ವಾಸ್ತವತೆಯನ್ನು ಸಮರ್ಥವಾಗಿ ಗ್ರಹಿಸಲು ಅವರಿಗೆ ಸಾಧ್ಯವಾಯಿತು.

ಗಾಂಧೀ ಅರ್ಥಶಾಸ್ತ್ರದ ಜೀವಾಳ ಎಂದರೆ "ಆರ್ಥಿಕ ಸ್ವಾವಲಂಬನೆ". ಸಮಾಜವಾದವು ಗಾಂಧೀಜಿ ಅವರಿಗೆ ಸಹಜವಾಗಿ ಬಂದುದಾಗಿತ್ತು. ಬ್ರಿಟಿಷರ ಶೋಷಣಾತ್ಮಕ ಯೋಜನೆಯನ್ನು ಅವರು ಬಹಳ ಸ್ಪಷ್ಟವಾಗಿ ಗುರುತಿಸಿದ್ದರು. ಸ್ವಾತಂತ್ರ್ಯ ಹೋರಾಟಕ್ಕೆ ಅವರು ಸ್ವದೇಶಿ ಮತ್ತು ಅಸಹಕಾರಗಳನ್ನು ಸಾಧನವಾಗಿ ಬಳಸಿದರು. ಜನಸಮುದಾಯದ ನಿರುದ್ಯೋಗ ಮತ್ತು ಬಡತನಗಳಿಗೆ ಯೂರೋಪಿಯನ್ ಉಡುಪೇ ಮೂಲ ಕಾರಣ ಎಂದು ಗಾಂಧೀಜಿ ಅವರು ಪ್ರತಿಪಾದಿಸಿದರು. ಅವರು ರಾಷ್ಟ್ರೀಯ ಸ್ವಾವಲಂಬನೆಗೆ ಶಾಂತಿಯುತ ನಾಗರಿಕ ಪ್ರತಿರೋಧವಾಗಿ ಖಾದಿಯನ್ನು ಬಳಸಲು ಪ್ರೇರೇಪಿಸಿದರು. ಗಾಂಧಿ ಅವರು ಚಂಪಾರಣ್‌ದಲ್ಲಿ ರೈತ ಸತ್ಯಾಗ್ರಹ ಮತ್ತು ಖೇಡಾದಲ್ಲಿ ಬ್ರಿಟಿಷ್ ಸರ್ಕಾರದ ಬೆಂಬಲಿತ, ಕಾರ್ಖಾನೆ ಮಾಲೀಕರ ವಿರುದ್ಧ ಶೋಷಣಾತ್ಮಕ ತೆರಿಗೆಯನ್ನು ಮುಕ್ತಾಯಗೊಳಿಸಲು ಸತ್ಯಾಗ್ರಹದ ನೇತೃತ್ವ ವಹಿಸಿದ್ದರು.

ಗಾಂಧೀಜಿ ಅವರಿಗೆ ನೈತಿಕತೆ ಅತ್ಯಂತ ಮಹತ್ವ ಪೂರ್ಣವಾದುದಾಗಿತ್ತು. ಭಾರತದ ಆಧ್ಯಾತ್ಮಿಕ ಶಕ್ತಿಯನ್ನು ಪರಿಗಣಿಸಿ, ಅವರು ಅದನ್ನು ಅಪಾರವಾಗಿ ನಂಬಿದ್ದರು.

ಗಾಂಧೀಜಿ ಅವರ "ಆಶ್ರಮ"ದ ಕಲ್ಪನೆ ಗಮನಿಸಬೇಕಾದಂಥಹದು. ದಕ್ಷಿಣ ಆಫ್ರಿಕಾದಲ್ಲಿ ಅವರು'ಪೋನಿಕ್ಸ್ ಆಶ್ರಮ' ವೆಂಬ ಆಶ್ರಮವಾಸ ಪ್ರಾರಂಭಿಸಿದವರಲ್ಲಿ ಅಗ್ರ್ರಗಣ್ಯರಾಗಿದ್ದಾರೆ. ಇದರಲ್ಲಿ ಒಂದು ಸಣ್ಣ ಗುಂಪು ಅಥವಾ ಸಮುದಾಯದ ಜನ ತಮಗೆ ಅಗತ್ಯವಾದ ಆಹಾರ, ಬಟ್ಟೆ ಮತ್ತು ತಮ್ಮ ಬದುಕುವ ಮಾರ್ಗವನ್ನು ಅವರೇ ಸೃಷ್ಟಿಸಿಕೊಳ್ಳುವ ಸಮೂಹ ವಾಸಕ್ಕೆ ಹೋಲಿಸಬಹುದು. ಆಶ್ರಮ ವಾಸದ ಪಥದಲ್ಲಿ ಸಮಾನತೆ ಮತ್ತು ಸಹಕಾರಗಳ ಮೌಲ್ಯಗಳನ್ನೂ ಹಾಗೂ ಧರ್ಮದರ್ಶಿತ್ವವನ್ನು ಗಾಂಧಿ ಅವರು, ಆಶ್ರಮದ ಪರಿಕಲ್ಪನೆಯಲ್ಲಿ, ಸ್ವಾವಲಂಬನೆಯ ಜೀವನಕ್ರಮ ಮತ್ತು ವೈಯಕ್ತಿಕ ಅಧ್ಯಾತ್ಮಿಕ ಅಭ್ಯುದಯವನ್ನು ರೂಢಿಸಿಕೊಂಡರು.

ಗಾಂಧೀಜಿ ಅವರ ಜೀವನ ಚಕ್ರದ ಮೂಲ ಆಧಾರವೆಂದರೆ ಸತ್ಯ ಮತ್ತು ಅಹಿಂಸೆ. ಭಾರತದ ಸಮಾಜವಾದಿಗಳು ಮತ್ತು ಕಮ್ಯುನಿಸ್ಟರಿಗೆ ವಿಭಿನ್ನವಾಗಿ ಗಾಂಧೀಜಿ ಅವರು ವರ್ಗ ಸಂಘರ್ಷ ಮತ್ತು ವರ್ಗಾಧಾರಿತ ಕ್ರಾಂತಿಯನ್ನು ನಿರಾಕರಿಸಿದರು. ಅವರಿಗೆ ಪ್ರಾಪಂಚಿಕ ಅಭಿವೃದ್ಧಿಗಿಂತ ಮಾನವರ ಘನತೆಯ ಸಂರಕ್ಷಣೆಯೇ ಅತ್ಯಂತ ಪ್ರಮುಖವಾದುದಾಗಿತ್ತು. ಗಾಂಧೀಜಿ ಅವರು ಅಹಿಂಸಾತ್ಮಕ ಮಾನವೀಯ ಸಮಾಜವಾದದಲ್ಲಿ ವಿಶ್ವಾಸ ಇಟ್ಟುಕಂಡಿದ್ದರು. 'ಯಾರೊಬ್ಬರ ಸಮ್ಮತವಿಲ್ಲದೆ ಏನನ್ನೂ ಮಾಡಲಾಗದು' ಎಂಬುದಾಗಿ ಅವರು ಅಪಾರವಾಗಿ ನಂಬಿದ್ದರು.

ಗಾಂಧೀಜಿ ಅವರು ಪ್ರಜಾಪ್ರಭುತ್ವವನ್ನು ಜೀವನ ವಿಧಾನವನ್ನಾಗಿ ಒಪ್ಪಿಕೊಂಡಿದ್ದರು. ಅವರಿಗೆ ಹಣಕ್ಕಿಂತ ಮನುಷ್ಯರು ಪ್ರಮುಖರಾಗುತ್ತಾರೆ. ಅವರ ಆರ್ಥಿಕ ಆಲೋಚನೆ ಸರಳ ಜೀವನದ ಸುತ್ತಲೇ ಸುತ್ತುವಂಥಹದು.

ಎಲ್ಲ ರೀತಿಯ ಗ್ರಾಹಕತ್ವವನ್ನು ಅವರು ನಿರಾಕರಿಸಿದರು. ಗಾಂಧೀಜಿ ಅವರು ಬದುಕಿನ ಗುಣಮಟ್ಟದಲ್ಲಿ ಏರಿಕೆಯಾಗಬೇಕೆಂದು ಪ್ರತಿಪಾದಿಸಲಿಲ್ಲ. ಆದರೆ ಯಾವಾಗಲೂ ಜೀವದ ಗುಣಮಟ್ಟ ಮೇಲ್ದರ್ಜೆಗೇರಬೇಕೆಂದು ಮಾತನಾಡುತ್ತಿದ್ದರು. ಯಾವಾಗ ಗಾಂಧೀಜಿ ಅವರು ಆರ್ಥಿಕ ಸಮಾನತೆಯ ಬಗ್ಗೆ ಮಾತನಾಡಿದರೋ ಆಗ ಇರುವೆಗೂ, ಆನೆಗೂ ಸಮ ಪ್ರಮಾಣದ ಆಹಾರವನ್ನು ಕೊಡಲು ಸಾಧ್ಯವೇ? ಎಂದು ಕೇಳುತ್ತಿದ್ದರು. ಜನಸಂಖ್ಯೆಯಲ್ಲಿನ, ಅತ್ಯಂತ ತಳವರ್ಗದವರ ಪ್ರಮುಖ ಅಗತ್ಯಗಳ ಬಗ್ಗೆ ಅವರು ಅತಿ ಹೆಚ್ಚು ಗಮನಕೊಟ್ಟರು.

"ತನ್ನಲ್ಲಿರುವ ಸಾಧನವನ್ನು ಬಳಸುವ ಸಾಮರ್ಥ್ಯವುಳ್ಳವನು ಸಂಪಾದಿಸುವ ಹಕ್ಕನ್ನು ಹೊಂದುವನು" ಎಂದು ಹೇಳುವ 'ಸರ್ವೋದಯದ' ಕಲ್ಪನೆಯನ್ನು ಅವರು ವಿಶ್ವಕ್ಕೆ ಕೊಟ್ಟರು. ಇನ್ನೊಂದಾರ್ಥದಲ್ಲಿ "ಪ್ರತಿಯೊಬ್ಬರಿಗೂ ಅವರ ಅಗತ್ಯಕ್ಕೆ ತಕ್ಕಂತೆ" ಅಹಿಂಸಾತ್ಮಕ ಗ್ರಾಮೀಣ ಆರ್ಥಿಕತೆಯ ಮೇಲೆ ಕೇಂದ್ರೀಕೃತವಾಗಿತ್ತು ಎಂಬುದಾಗಿದೆ. ಅವರು ಪ್ರತಿಪಾದಿಸಿದ ನಾಲ್ಕು ಅಂಶಗಳೆಂದರೆ;

ಧರ್ಮದರ್ಶಿತ್ವ
ಆರ್ಥಿಕ ಚಟುವಟಿಕೆಯ ವಿಕೇಂದ್ರೀಕರಣ
ಕಾರ್ಮಿಕಾಧಿಕ್ಯದ ತಾಂತ್ರಿಕತೆ
ದುರ್ಬಲ ವರ್ಗದವರಿಗೆ ಪ್ರಾಧಾನ್ಯತೆ

ಉತ್ಪಾದನೆಯು ಸಾಮಾಜಿಕ ಅಗತ್ಯತೆಯನ್ನು ಅನುಸರಿಸಿ ಕೈಗೊಳ್ಳಬೇಕೆ ಹೊರತು ವೈಯಕ್ತಿಕ ದುರಾಸೆಯನ್ನು ಆಧರಿಸಿ ಅಲ್ಲ, ಎಂಬುದು ಗಾಂಧೀಜಿ ಅವರ ಅಭಿಪ್ರಾಯವಾಗಿತ್ತು.

ವರ್ಗ ಸಂಘರ್ಷದ ಹಾದಿ ಮತ್ತು ಪರಸ್ಪರ ದ್ವೇಷ, ಆತ್ಮಹತ್ಯಾ ಘಾತುಕವೆಂದು ಗಾಂಧೀಜಿ ಸ್ಪಷ್ಟವಾಗಿ ಹೇಳಿದ್ದರು. ಶೋಷಣಾ ರಹಿತ ಸಮಾಜವಾದದ ಬಗ್ಗೆ ಅವರು ಮಾತನಾಡಿದ್ದರು. ಅವರ ಪ್ರಕಾರ ಎಲ್ಲರೂ ಸಮಾನವಾಗಿ ಜನಿಸುವರು. ಸಮಾನ ಅವಕಾಶದ ಹಕ್ಕು, ಪ್ರತಿಯೊಬ್ಬರಿಗೂ ಇದೆ. ಪ್ರತಿಯೊಬ್ಬರು ಸಮಾನವಾದ ಸಾಮರ್ಥ್ಯವನ್ನು ಹೊಂದಿರುವುದಿಲ್ಲ, ಅಹಿಂಸೆ ಅಥವಾ ಹಿಂಸಾರಾಹಿತ್ಯವೇ ಸಮಾಜದ ಅತ್ಯಗತ್ಯವಾದ ಲಕ್ಷಣ. ಆರ್ಥಿಕ ಸಮಾನತೆಯ ಬಗ್ಗೆ ಮಾತನಾಡುವಾಗ ಪ್ರತಿಯೊಬ್ಬರೂ ಒಂದೇ ಸಮನಾದ ಹಣ ಹೊಂದಿರಬೇಕೆಂದಿಲ್ಲ ಎಂದು ಗಾಂಧೀಜಿ ಸ್ಪಷ್ಟಪಡಿಸಿದರು. 'ಸಮಾನ ಹಂಚಿಕೆ' ಮತ್ತು 'ನ್ಯಾಯಸಂಗತ ಹಂಚಿಕೆ'ಗಳಲ್ಲಿನ ವ್ಯತ್ಯಾಸದ ಬಗ್ಗೆ ಅವರು ಸ್ಪಷ್ಟೀಕರಿಸಿದರು. ಅವರ ಪ್ರಕಾರ ಸುಧಾರಣೆಗಳನ್ನು ಮಾಡುವಲ್ಲಿ ಆತುರ ಸಲ್ಲದು. 'ಉಳ್ಳವರು' ಮತ್ತು ಇಲ್ಲದವರು' ಇಬ್ಬರಿಗೂ ಶಿಕ್ಷಣ ಅಗತ್ಯವೆಂದು ಅವರು ಪ್ರತಿಪಾದಿಸಿದರು.

ರಾಷ್ಟ್ರೀಕರಣದ ಬಗ್ಗೆ ಗಾಂಧೀಜಿ ಅವರು ಸುಧೀರ್ಘವಾಗಿ ಮಾತನಾಡಿದ್ದರು. ಉತ್ಪಾದನೆ ಎಂದು ಆರ್ಥೈಸುವ ಎಲ್ಲವೂ ರಾಷ್ಟ್ರೀಕರಣ ಆಗಲೇಬೇಕೆಂದು ಅವರೆಂದೂ ಪ್ರತಿಪಾದಿಸಲಿಲ್ಲ. 'ಯೋಜಿತ ಉತ್ಪಾದನೆ' ಮತ್ತು 'ಖಾಸಗಿ ಉದ್ಯಮಶೀಲತೆ' ಎರಡನ್ನೂ ಅವರು

ಬೆಂಬಲಿಸಿದರು ಕೇವಲ ಸರಕಾರದ ಉತ್ಪಾದನೆ ಮಾತ್ರ ಇರುವುದಾದರೆ, ಜನ ಬೌದ್ಧಿಕವಾಗಿಯೂ, ನೈತಿಕವಾಗಿಯೂ ದಿವಾಳಿಯಾಗುತ್ತಾರೆ ಎಂದರು. ಮುಂದುವರಿದು, ಬಂಡವಾಳಶಾಹಿಗಳು ಭೂಮಿಯನ್ನು ಉಳಿಸಿಕೊಳ್ಳುವಂತೆ ಬೆಂಬಲಿಸುತ್ತೇನೆ, ಆದರೆ ಅವರು ತಮ್ಮ ಆಸ್ತಿಗಳ ಧರ್ಮದರ್ಶಿಗಳಾಗುವಂತೆ ನಾನು ಮಾಡುತ್ತೇನೆ ಎಂದು ಅವರು ಹೇಳಿದರು.

ಗಾಂಧೀಜಿ ಅವರು ಬಡತನವನ್ನು ಮೆಚ್ಚಲಿಲ್ಲ ಪ್ರತಿಯೊಬ್ಬರೂ ತಮ್ಮ ಖರ್ಚುವೆಚ್ಚಗಳನ್ನು ಭರಿಸಲು ಶಕ್ಯವಾಗುವಂಥಹ ಸಾಕಷ್ಟು ಕೆಲಸವನ್ನು ಗಳಿಸಲು ಸಶಕ್ತರಾಗಿರಬೇಕೆಂದು ಅವರು ಪ್ರತಿಪಾದಿಸಿದರು. ಯಾವಾಗ ಅವರು ಯಂತ್ರಗಳು ಮತ್ತು ಬೃಹತ್ ಉದ್ದಿಮೆಗಳನ್ನು ವರ್ಜಿಸಬೇಕೆಂದು ಪ್ರತಿಪಾದಿಸಿರೋ, ಆಗ ಅವರಿಗೆ ಬೃಹತ್ ಉದ್ದಿಮೆಗಳು, ಸಾಮೂಹಿಕ ನಿರುದ್ಯೋಗಕ್ಕೆ ಕಾರಣವಾಗಬಾರದೆಂಬುದರ ಬಗ್ಗೆ ಸ್ಪಷ್ಟತೆ ಇದ್ದಿತ್ತು.

ಇಂದು ಬಂಡವಾಳಶಾಹಿಗಳು ಮತ್ತು ಕಮ್ಯುನಿಸ್ಟರು ಇಬ್ಬರೂ ಅಪೂರ್ಣರೆಂಬುದನ್ನು ಸಾಬೀತು ಮಾಡಿದ್ದಾರೆ. ಧರ್ಮದರ್ಶಿತ್ವದ ಮೂಲಕ ಸಮಾಜವನ್ನೂ ಬದಲಾವಣೆ ಮಾಡುವ ಗಾಂಧೀಜಿ ಅವರ ವಿಧಾನವೇ ಬಂಡವಾಳಶಾಹಿಗಳ ಅಸ್ತವ್ಯಸ್ತತೆ ಮತ್ತು ಕಮ್ಯುನಿಷ್ಟರುಗಳ ನಿಷ್ಠುರತೆಗಳ ನಡುವಿನ ಮಧ್ಯಮ ಮಾರ್ಗವಾಗಿದೆ.

# ಗಾಂಧೀಜಿ ಅವರ ಜೀವನ ಘಟನಾವಳಿಗಳು

| | |
|---|---|
| ಪೋರಬಂದರದಲ್ಲಿ ಜನನ | 02.10.1869 |
| ಕಸ್ತೂರ್‌ಬಾರೊಂದಿಗೆ ವಿವಾಹ | 1881 |
| ಮೆಟ್ರಿಕ್ಯುಲೇಶನ್ ಉತ್ತೀರ್ಣರಾದದ್ದು | 1887 |
| ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ | 1888 |
| ಬ್ಯಾರಿಸ್ಟರರಾಗಿ ದಾಖಲಾತಿ | 1891 |
| ಮರಳಿ ಭಾರತಕ್ಕೆ | 1891 |
| ದಕ್ಷಿಣ ಆಫ್ರಿಕಾಕ್ಕೆ ಹಡಗಿನಲ್ಲಿ ಪ್ರಯಾಣ | 1893 |
| ಭಾರತ ಸಂದರ್ಶನ | 1896 ಮತ್ತು 1901 |
| ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಂಡಿದ್ದು | 1901 |
| ಇಂಡಿಯನ್ ಒಪಿನಿಯನ್ ಪತ್ರಿಕೆಯ ಪ್ರಾರಂಭ | 1903 |
| ಫೀನಿಕ್ಸ್ ಆಶ್ರಮ ಸ್ಥಾಪನೆ | 1904 |
| ಬೋಯರ್ ಯುದ್ಧ ಮತ್ತು ಜೂಲು ದಂಗೆಯಲ್ಲಿ ಇಂಡಿಯನ್ ಅಂಬುಲೆನ್ಸ್‌ನ ಕೋರ್ ನೇತೃತ್ವ | 1899 ಮತ್ತು 1906 |
| ಬ್ರಹ್ಮಚರ್ಯ ವ್ರತ ಸ್ವೀಕಾರ | 1906 |
| ಇಂಗ್ಲೆಂಡಿಗೆ ಪ್ರಯಾಣ | 1906 ಮತ್ತು 1909 |
| ದಕ್ಷಿಣ ಆಫ್ರಿಕಾದಲ್ಲಿ ಪ್ರಥಮ ಜೈಲುವಾಸ | 1908 |
| ಟಾಲ್‌ಸ್ಟಾಯ್ ಆಶ್ರಮ ಸ್ಥಾಪನೆ | 1910 |
| ದಕ್ಷಿಣ ಆಫ್ರಿಕಾದಲ್ಲಿ ಚಾರಿತ್ರಿಕ ಸತ್ಯಾಗ್ರಹ ಆರಂಭ | 1913 |
| ಭಾರತಕ್ಕೆ ಆಗಮನ | 1915 |

| | |
|---|---|
| ಸಬರಮತಿ ಆಶ್ರಮ ಸ್ಥಾಪನೆ | 1915 |
| ಖೇಡಾದಲ್ಲಿ ಕರನಿರಾಕರಣೆ ಚಳುವಳಿ | 1918 |
| ಜಲಿಯನ್ ವಾಲಾಬಾಗ್ ಹತ್ಯಾಕಾಂಡ | 1919 |
| ಯಂಗ್ ಇಂಡಿಯಾ, | |
| ನವಜೀವನ ಪತ್ರಿಕೆಗಳ ಆರಂಭ | 1919 |
| ಅಸಹಕಾರ ಆಂದೋಲನ | 1921 |
| ಭಾರತದಲ್ಲಿ ಪ್ರಥಮ ಜೈಲುವಾಸ | 1922 |
| ಖಾದಿಗಾಗಿ ಪ್ರವಾಸ | 1927 |
| ಉಪ್ಪಿನ ಸತ್ಯಾಗ್ರಹ ಮತ್ತು ದಾಂಡೀಯಾತ್ರೆ | 1930 |
| ಯೂರೋಪು ಸಂದರ್ಶನ ಮತ್ತು | |
| ದುಂಡು ಮೇಜಿನ ಪರಿಷತ್ತು | 1931 |
| ಸೇವಾಗ್ರಾಮ ಆಶ್ರಮ ಸ್ಥಾಪನೆ | 1933 |
| ಹರಿಜನ ಸೇವೆಗಾಗಿ ನಿಧಿ ಸಂಗ್ರಹಣೆ | 1933 |
| ಹರಿಜನ್ ಸಾಪ್ತಾಹಿಕ ಪ್ರಾರಂಭ | 1933 |
| ನಯೀ ತಾಲೀಂ ಶಿಕ್ಷಣ ಪದ್ಧತಿ ಪ್ರಾರಂಭ | 1937 |
| "ಭಾರತ ಬಿಟ್ಟು ತೊಲಗಿ" ಚಳುವಳಿ | 1942 |
| ಕೊನೆಯ ಬಾರಿಗೆ ಆಗಾಖಾನ್ | |
| ಅರಮನೆಯಲ್ಲಿ ಸೆರೆವಾಸ | 1942–44 |
| ಹಂತಕನ ಗುಂಡೇಟಿಗೆ ಬಲಿ | 30–1–1948 |

# ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು

| | | |
|---|---|---|
| 1. | ಆರೋಗ್ಯ ರಹಸ್ಯ | 10–00 |
| 2. | ಕರ್ನಾಟಕದಲ್ಲಿ ಗಾಂಧೀ | 5–00 |
| 3. | ರಾಮನಾಮ | 6–00 |
| 4. | ಗಾಂಧೀ ಬಳಗದ ವಿದೇಶಿಯರು | 40–00 |
| 5. | ಆರೋಗ್ಯ | 8–00 |
| 6. | ಪ್ರಾರ್ಥನೆ | 8–00 |
| 7. | ಸತ್ಯಾಗ್ರಹ | 8–00 |
| 8. | ಮಹಿಳೆಯರಿಗಾಗಿ | 8–00 |
| 9. | ಪಂಚಾಯತ್ ರಾಜ್ | 12–00 |
| 10. | ಆದರ್ಶಗಳು | 12–00 |
| 11. | ನಮ್ಮ ಗಾಂಧೀ ತಾತ | 25–00 |
| 12. | ದೇವನಗರಿಯಲ್ಲಿ ಗಾಂಧೀ ಧ್ವನಿ | 2–00 |
| 13. | ನಮ್ಮ ಗಾಂಧೀ ತಾತ | 15–00 |
| 14. | ಹೋರಾಟ ಶ್ರೀ | 40–00 |
| 15. | ಮಹಾತ್ಮ ಗಾಂಧೀಜಿ ಅವರ ಜೀವನ ಮೈಲಿಗಲ್ಲುಗಳು | 3–00 |
| 16. | ಗಾಂಧೀಜಿ ಜೀವನ ಚರಿತ್ರೆ | 25–00 |
| 17. | ಕುವೆಂಪು ಕಂಡ ಗಾಂಧೀ | 25–00 |
| 18. | ಉಪ್ಪಿನ ಸತ್ಯಾಗ್ರಹ | 5–00 |
| 19. | ಹಿಂದ್ ಸ್ವರಾಜ್ | 50–00 |
| 20. | ಗಾಂಧೀ ಮತ್ತು ಆಧ್ಯಾತ್ಮಿಕ ಜೀವನ | 25–00 |
| 21. | ನನ್ನ ಕನಸಿನ ಭಾರತ | 30–00 |

| | | |
|---|---|---|
| 22. | ಹಿಂದೂ ಧರ್ಮ | 25–00 |
| 23. | ಮಹಿಳೆಯರು | 30–00 |
| 24. | ಸ್ವಾತಂತ್ರ್ಯ | 25–00 |
| 25. | ಅಸ್ಪೃಶ್ಯತೆ | 30–00 |
| 26. | ಒಳ್ಳೆಯ ಜೀವನ | 25–00 |
| 27. | ಪ್ರಾರ್ಥನೆ | 25–00 |
| 28. | ಗಾಂಧೀ ಮತ್ತು ಕರ್ನಾಟಕ | 200–00 |
| 29. | ಸತ್ಯ | 30–00 |
| 30. | ವಿದ್ಯಾರ್ಥಿಗಳಿಗಾಗಿ | 30–00 |
| 31. | ಸರ್ವೋದಯ | 30–00 |
| 32. | ಖಾದಿ ಗ್ರಾಮೋದ್ಯೋಗ | 30–00 |
| 33. | ನನ್ನ ಬಾಲ್ಯದ ನೆನಪುಗಳು | 30–00 |
| 34. | ಗ್ರಾಮರಾಜ್ಯ ಆಡಳಿತ | 5–00 |
| 35. | ನನ್ನ ಕನಸಿನ ಸ್ವರಾಜ್ಯ | 5–00 |
| 36. | ಗಾಂಧೀ ಮತ್ತು ಹಾಸ್ಯ | 20–00 |
| 37. | ನನ್ನ ಆದರ್ಶಗ್ರಾಮ | 5–00 |
| 38. | ಮಹಾತ್ಮ ಗಾಂಧೀ ವಿಚಾರಗಳು ಹಾಗೂ ವ್ಯವಸ್ಥಾಪನ ಪದ್ಧತಿ | 48–00 |
| 39. | ಸತ್ಯಾಗ್ರಹಿ | 40–00 |
| 40. | ಗ್ರಾಮದಾನ ಗ್ರಾಮ ಸ್ವರಾಜ್ಯ | 25–00 |
| 41. | ಗಾಂಧೀಜಿಯವರ ಪ್ರಾತ: ಸಾಯಂ ಪ್ರಾರ್ಥನೆ ಮತ್ತು ಭಜನೆ | |
| 42. | ಉಪ್ಪಿನ ಸತ್ಯಾಗ್ರಹ ಮತ್ತು ಮೈಲಾರ ಮಹಾದೇವ | 5–00 |

| | | |
|---|---|---|
| 43. | ಸತ್ಯಾಗ್ರಹ | 5–00 |
| 44. | ಹಿಂದ್ ಸ್ವರಾಜ್ | 5–00 |
| 45. | ಆರೋಗ್ಯ | 5–00 |
| 46. | ಮಹಾತ್ಮ ಗಾಂಧಿ ಪ್ರಸ್ತುತತೆ | 10–00 |
| 47. | ಬಹುರೂಪಿ ಗಾಂಧಿ | 10–00 |
| 48. | ನಂದಿ ಗಿರಿಧಾಮದಲ್ಲಿ ಮಹಾತ್ಮ ಗಾಂಧಿ | 30–00 |
| 49. | ಕೃತಯುಗಿ ವಿನೋಬಾ ಭಾವೆ | 15–00 |
| 50. | ಮೋಹನ ತರಂಗ | 40–00 |
| 51. | ನಮ್ಮ ಗಾಂಧಿ ತಾತ | 5–00 |
| 52. | ಗೀತಾ ಪ್ರವಚನ | 80–00 |
| 53. | ಜೆ.ಪಿ. ಜೀವನ ಹಾದಿ | 45–00 |
| 54. | ಗಣ್ಯರು ಕಂಡಂತೆ ಗಾಂಧಿ | 20.0 |
| 55. | ಗೀತಾಮಾತೆ | 80.00 |
| 56. | Temple & Mosque | 10–00 |
| 57. | Rastrapita Mahatma Gandhi | 25–00 |
| 58. | Swarajya of My Dreams | 5–00 |
| 59. | Gandhi My Grand Father | 5–00 |
| 60. | Grand Pa Gandhi | 5–00 |
| 61. | Relevance of Gandhi | 20–00 |
| 62. | Vinoba Sage of the age | 20.00 |

## ಕರ್ನಾಟಕದಲ್ಲಿ ಗಾಂಧೀಜಿ ಭೇಟಿ ನೀಡಿದ ಸ್ಥಳಗಳು

| | |
|---|---|
| • ಬೆಂಗಳೂರು | ದಿ. 08-05-1915 |
| • ಬೆಳಗಾವಿ | ದಿ. 27-04-1916 ರಿಂದ<br>ದಿ. 01-05-1916 ರವರೆಗೆ |
| • ಬಿಜಾಪುರ (ವಿಜಯಪುರ) | ದಿ. 05-05-1918 ರಿಂದ<br>ದಿ. 06-05-1918 ರವರೆಗೆ |
| • ಕಾಸರಗೋಡು | ದಿ. 19-08-1920 |
| • ಮಂಗಳೂರು | ದಿ. 20-08-1920 |
| • ಬೆಂಗಳೂರು | ದಿ. 21-08-1920 |
| • ನಿಪ್ಪಾಣಿ, ಚಿಕ್ಕೋಡಿ, ಹುಕ್ಕೇರಿ<br>ಸಂಕೇಶ್ವರ, ಬೆಳಗಾವಿ | ದಿ. 08-11-1920 |
| • ಬೆಳಗಾವಿ ಶಹಾಪುರ<br>ಖಾನಾಪುರ, ನಂದಗಢ<br>ಹಳ್ಯಾಳ | ದಿ. 09-11-1920 |
| • ಧಾರವಾಡ | ದಿ. 10-11-1920 |
| • ಹುಬ್ಬಳ್ಳಿ, ಗದಗ | ದಿ. 11-11-1920 |
| • ಸಾಂಗಲಿ | ದಿ. 12-11-1920 |
| • ಬಾಗಲಕೋಟೆ | ದಿ. 27-05-1921 |
| • ಬಿಜಾಪುರ (ವಿಜಯಪುರ), ಸೊಲ್ಲಾಪುರ | ದಿ. 28-05-1921 |

| | |
|---|---|
| ● ಬಳ್ಳಾರಿ | ದಿ. 30-09-1921 |
| ● ಬೆಳಗಾವಿ | ದಿ. 21-12-1924 ರಿಂದ |
| | ದಿ. 30-12-1924 ರವರೆಗೆ |
| ● ಗುಲ್ಬರ್ಗಾ | ದಿ. 22-02-1927 ರಿಂದ |
| | ದಿ. 23-02-1927 ರವರೆಗೆ |
| ● ನಿಪ್ಪಾಣಿ | ದಿ. 27-03-1927 ರಿಂದ |
| | ದಿ. 31-03-1927 ರವರೆಗೆ |
| ● ಬೆಳಗಾವಿ | ದಿ. 01-04-1927 |
| | ದಿ. 18-04-1027 ರಿಂದ |
| | ದಿ. 19-04-1927ರವರೆಗೆ |
| ● ಬೆಂಗಳೂರು | ದಿ. 06-06-1927 ರಿಂದ |
| | ದಿ. 13-07-1927 ರವರೆಗೆ |
| ● ತುಮಕೂರು | ದಿ. 14-07-1927 |
| ● ತುಮಕೂರು, ಮಧುಗಿರಿ | ದಿ. 15-07-1927 |
| ● ತುಮಕೂರು | ದಿ. 16-07-1927 |
| ● ಬೆಂಗಳೂರು | ದಿ. 17-07-1927 |
| ● ಬೆಂಗಳೂರು | ದಿ. 18-07-1927 |
| ● ಮೈಸೂರು | ದಿ. 19-07-1927 ರಿಂದ |
| | ದಿ. 21-07-1927 ರವರೆಗೆ |

| | |
|---|---|
| • ಕೃಷ್ಣರಾಜಸಾಗರ, ಯಡತೊರೆ ಶ್ರೀರಂಗಪಟ್ಟಣ, ದರಿಯಾದೌಲತ್ | ದಿ. 22-07-1927 |
| • ಮೈಸೂರು | ದಿ. 23-07-1927 |
| • ಬೆಂಗಳೂರು | ದಿ. 24-07-1927 ರಿಂದ ದಿ. 30-07-1927 ರವರೆಗೆ |
| • ಕ್ಲೊಸ್‌ಪೇಟೆ (ರಾಮನಗರ) | ದಿ. 31-07-1927 |
| • ಕಾನಕಾನಹಳ್ಳಿ (ಕನಕಪುರ) | |
| • ಬೆಂಗಳೂರು | ದಿ. 01-08-1927 |
| • ಅರಸೀಕರೆ, ಹಾಸನ | ದಿ. 02-08-1927 |
| • ಹಾಸನ | ದಿ. 03-08-1927 |
| • ಹಾಸನ, ಹೊಳೆನರಸೀಪುರ | ದಿ. 04-08-1927 |
| • ಬೆಂಗಳೂರು | ದಿ. 05-08-1927 ರಿಂದ ದಿ. 11-08-1927 ರವರೆಗೆ |
| • ದಾವಣಗೆರೆ | ದಿ. 12-08-1927 |
| • ಹರಿಹರ, ಹೊನ್ನಾಳಿ ಮಲೆಬೆನ್ನೂರು | ದಿ. 13-08-1927 |
| • ಶಿವಮೊಗ್ಗ | ದಿ. 14-08-1927 ರಿಂದ ದಿ. 15-08-1927 ರವರೆಗೆ |
| • ಆಯನೂರು, ಕುಂಸಿ, ಸಾಗರ ಶಿವಮೊಗ್ಗ | ದಿ. 16-08-1927 |

- ಶಿವಮೊಗ್ಗ, ತೀರ್ಥಹಳ್ಳಿ ದಿ. 17-08-1927
  ಮಂದಗದ್ದೆ, ರಾಜನೂರು
- ಭದ್ರಾವತಿ, ತರೀಕೆರೆ ದಿ. 18-08-1927
- ಬೀರೂರು, ಕಡೂರು
- ಚಿಕ್ಕಮಗಳೂರು ದಿ. 19-08-1927
- ಬೇಲೂರು, ಹಳೇಬೀಡು ದಿ. 20-08-1927
- ಅರಸೀಕೆರೆ
- ತಿಪಟೂರು ದಿ. 21-08-1927
- ಬೆಂಗಳೂರು ದಿ. 22-08-1927
- ಬೆಂಗಳೂರು ದಿ. 23-08-1927
- ಹೊಸೂರು, ಸೂಳಗಿರಿ ದಿ. 24-08-1927
  ಕೃಷ್ಣಗಿರಿ
- ಬೆಂಗಳೂರು ದಿ. 25-08-1927 ರಿಂದ
  ದಿ. 30-08-1927 ರವರೆಗೆ
- ಹಿಂದೂಪುರ, ವಿಧುರಾಶ್ವತ್ಥ ದಿ. 04-01-1934
  ಗೌರಿಬಿದನೂರು
  ದೊಡ್ಡಬಳ್ಳಾಪುರ, ತುಮಕೂರು
  ತ್ಯಾಮಗೊಂಡ್ಲು, ನೆಲಮಂಗಲ
  ಬೆಂಗಳೂರು, ಮೈಸೂರು

- ತಗಡೂರು, ಬದನವಾಳ ದಿ. 05-01-1934
  ನಂಜನಗೂಡು, ಮೈಸೂರು
- ಮಂಡ್ಯ, ಚನ್ನಪಟ್ಟಣ, ರಾಮನಗರ ದಿ. 06-01-1934
  ಕನಕಪುರ, ಬಿಡದಿ, ಕೆಂಗೇರಿ
- ಬೆಂಗಳೂರು ದಿ. 07-01-1934 ರಿಂದ
  ದಿ. 09-01-1934 ರವರೆಗೆ
- ಪೊನ್ನಂಪೇಟೆ, ಹುದಿಕೇರಿ ದಿ. 22-02-1934
- ವಿರಾಜಪೇಟೆ, ಬೆಳ್ಳೂರು ದಿ. 23-02-1934
- ಸೋಮವಾರ ಪೇಟೆ
- ಗುಂಡುಕಟ್ಟೆ
- ಮಡಿಕೇರಿ, ಸಂಪಾಜೆ, ಸುಳ್ಯ ದಿ. 24-02-1934
- ಪುತ್ತೂರು, ಉಪ್ಪಿನಂಗಡಿ
- ವಿಠಲಗಬ್ಬ, ಕಲ್ಲಡ್ಕ, ಪಾಣೆ
- ಮಂಗಳೂರು, ಬಂಟ್ವಾಳ
- ಮಂಗಳೂರು
- ಮಂಗಳೂರು, ಗುರುಪುರ, ಬಜ್ಪೆ ದಿ. 25-02-1934
  ಯಕ್ಕೂರು, ಕಟೀಲು, ಕಿನ್ನಗೋಳಿ
  ಮೂಲ್ಕಿ, ಪಡುಬಿದ್ರಿ, ಕಾಟಪಾಡಿ
  ಗುರುಪುರ, ಉದ್ಯಾವರ
  ಉಡುಪಿ, ಬ್ರಹ್ಮಾವರ, ಸಿದ್ದಾಪುರ

- ಕುಂದಾಪುರ ದಿ. 26-02-1934
- ಕುಂದಾಪುರ, ಭಟ್ಕಳ ದಿ. 27-02-1934
  ಹೊನ್ನಾವರ, ಕಾರವಾರ
- ಕಾರವಾರ, ಕುಮುಟಾ, ಅಂಕೋಲ ದಿ. 28-02-1934
  ಚಂದಿಯಾ, ಶಿರಸಿ
- ಶಿರಸಿ, ಸಿದ್ದಾಪುರ, ದಾಸನಕೊಪ್ಪ ದಿ. 01-03-1934
  ಇಸಲೂರು, ಏಕಾಂಬಿ, ಆಲೂರು
  ಬ್ಯಾಡಗಿ, ಮೋಟೆಬೆನ್ನೂರು
- ಹಾವೇರಿ, ರಾಣೆಬೆನ್ನೂರು, ಹರಿಹರ ದಿ. 02-03-1934
  ದಾವಣಗೆರೆ, ಹರಪನಹಳ್ಳಿ, ಕೊಟ್ಟೂರು
  ಕೂಡ್ಲಿಗೆ, ದುಗ್ಗಾವತಿ, ಕಣಿವೆಹಳ್ಳಿ
  ಸೊಂಡೂರು
- ಸೊಂಡೂರು, ಬಳ್ಳಾರಿ, ಹೊಸಪೇಟೆ ದಿ. 03-03-1934
  ಭಾನಾಪುರ, ಗದಗ, ಜಕ್ಕಲಿ, ಹುಬ್ಬಳ್ಳಿ
- ಹುಬ್ಬಳ್ಳಿ, ಧಾರವಾಡ, ಅಮ್ಮಿನಭಾವಿ ದಿ. 04-03-1934
  ಹಿರೇಉಳ್ಳಗೇರಿ, ಬೈಲಹೊಂಗಲ
  ಉಪ್ಪಿನ, ಬೆಟಗೇರಿ, ಸೌಂದತ್ತಿ
  ಸಂಪಗಾಂವ್, ಹೊಸೂರು, ಬೆಳಗಾವಿ
- ಬೆಳಗಾವಿ ದಿ. 05-03-1934
- ಬೆಳಗಾವಿ ದಿ. 06-03-1934

- ಬೆಳಗಾವಿ, ಯಮಕನಮರಡಿ ಹುಕ್ಕೇರಿ, ಗೋಕಾಕ, ಸಂಕೇಶ್ವರ ನವಲೀಹಾಳ, ಚಿಕ್ಕೋಡಿ, ಅಂಕಲಿ — ದಿ. 07-03-1934
- ಶೆಡಬಾಳ, ಬನಹಟ್ಟಿ, ಅಥಣಿ ಬಿಜಾಪುರ (ವಿಜಯಪುರ), ತಿಕೋಟ, ತೊರವಿ ಇಳಕಲ್ — ದಿ. 08-03-1934
- ನಂದಿ ಬೆಟ್ಟ — 10-05-1936 ರಿಂದ 30-05-1936 ರವರೆಗೆ
- ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ ಕೋಲಾರ, ಬಂಗಾರ ಪೇಟೆ, ಕೆ. ಜಿ. ಎಫ್ — 31-05-1936
- ಬೆಂಗಳೂರು — 01-06-1936 ರಿಂದ 12-06-1936 ರವರೆಗೆ
- ಬೆಳಗಾವಿ ಜಿಲ್ಲೆಯ ಹುದಲಿ — 16-04-1937 ರಿಂದ 21-04-1937ರವರೆಗೆ

## ಏಕಾದಶ ವ್ರತಗಳು

| | |
|---|---|
| ಸತ್ಯ | **Truth** |
| ಅಹಿಂಸೆ | **Ahimsa or Love** |
| ಅಸ್ತೇಯ (ಕದಿಯದಿರುವುದು) | **Non-Stealing** |
| ಬ್ರಹ್ಮಚರ್ಯ | **Brahmacharya or Chastity** |
| ಅಸಂಗ್ರಹ (ಅಪರಿಗ್ರಹ) | **Non-Possession** |
| ಶರೀರ ಶ್ರಮ | **Physical Labour** |
| ಅಸ್ವಾದ (ನಾಲಿಗೆ ಚಪಲ) | **Control on the Palate** |
| ಸರ್ವತ್ರ ಭಯವರ್ಜನ (ಅಭಯ) | **Fearlessness** |
| ಸರ್ವಧರ್ಮ ಸಮಾನತ್ವ | **Equality of Religion** |
| ಸ್ವದೇಶಿ | **Swadeshi** |
| ಸ್ಪರ್ಶ ಭಾವನೆ (ಅಸ್ಪೃಶ್ಯತಾ ನಿವಾರಣೆ) | **Removal of Untouchability** |

---

| | |
|---|---|
| ಏಳು ಸಾಮಾಜಿಕ ಪಾತಕಗಳು | **Seven Social Sins** |
| ತತ್ವರಹಿತ ರಾಜಕಾರಣ | **Politics without Principles** |
| ದುಡಿಮೆ ಇಲ್ಲದ ಸಂಪತ್ತು | **Wealth without Work** |
| ಆತ್ಮಸಾಕ್ಷಿ ಇಲ್ಲದ ಸಂತೋಷ | **Pleasure without Conscience** |
| ಚಾರಿತ್ರ್ಯವಿಲ್ಲದ ಶಿಕ್ಷಣ | **Education without Character** |
| ನೀತಿ ಇಲ್ಲದ ವ್ಯಾಪಾರ | **Commerce without Morality** |
| ಮಾನವೀಯತೆ ಇಲ್ಲದ ವಿಜ್ಞಾನ | **Science without Humanity** |
| ತ್ಯಾಗ ಇಲ್ಲದ ಪೂಜೆ | **Worship without Sacrifice** |

– ಮಹಾತ್ಮ ಗಾಂಧೀಜಿ

# ಹದಿನೆಂಟು ರಚನಾತ್ಮಕ ಕಾರ್ಯಗಳು

# 18 CONSTRUCTIVE PROGRAMMES

| | |
|---|---|
| ಮತೀಯ ಐಕ್ಯತೆ | **Communal Unity** |
| ಅಸ್ಪೃಶ್ಯತಾ ನಿವಾರಣೆ | **Removal of Untouchability** |
| ಪಾನನಿರೋಧ | **Prohibition** |
| ಖಾದಿ | **Khadi** |
| ಇತರೆ ಗ್ರಾಮೋದ್ಯೋಗ | **Other village industries** |
| ಗ್ರಾಮ ನೈರ್ಮಲ್ಯ | **Village Sanitation** |
| ಮೂಲ ಶಿಕ್ಷಣ | **Basic Education** |
| ವಯಸ್ಕರ ಶಿಕ್ಷಣ | **Adult Education** |
| ಮಹಿಳಾ ಸಬಲೀಕರಣ | **Women Empowerment** |
| ಆರೋಗ್ಯ ಮತ್ತು ಶುಚಿತ್ವ ಶಿಕ್ಷಣ | **Hygiene & Health Education** |
| ಪ್ರಾದೇಶಿಕ ಭಾಷೆ | **Provincial Languages** |
| ರಾಷ್ಟ್ರಭಾಷೆ | **National Language** |
| ಆರ್ಥಿಕ ಸಮಾನತೆ | **Economic Equality** |
| ರೈತರ ಸಬಲೀಕರಣ | **Empowerment of Farmers** |
| ಕಾರ್ಮಿಕರ ಸಬಲೀಕರಣ | **Empowerment of Labours** |
| ಆದಿವಾಸಿ ಸಬಲೀಕರಣ | **Tribal Empowerment** |
| ಕುಷ್ಠರೋಗ ನಿರ್ಮೂಲನೆ | **Cure of Leprocy** |
| ವಿದ್ಯಾರ್ಥಿ | **Students** |

"ಇದು ಬಡವರ ಮನೆ, ಇಲ್ಲಿ ಚಿನ್ನದ ಬಳೆಗಳ ಬದಲಾಗಿ, ಗಾಜಿನ ಬಳೆಗಳೇ ಶೋಭಿಸುತ್ತವೆ. ಮನುಷ್ಯ ಜೀವನದಲ್ಲಿರುವ 'ಸುಖ' ಗಾಜಿನ ಬಳೆಯ ಹಾಗೆಯೇ ಆಕರ್ಷಕವಾಗಿದ್ದು, ನಾಜೂಕಾಗಿರುತ್ತದೆ. ಗಾಜಿನ ಬಳೆಗಳ ಹಾಗೆಯೇ ಬಹಳ ಎಚ್ಚರದಿಂದ ಈ ಸೌಭಾಗ್ಯವನ್ನು ಕಾಪಾಡಬೇಕಾಗುತ್ತದೆ. ಆದ್ದರಿಂದ ಗಾಜಿನ ಬಳೆಗಳೇ ಸೌಭಾಗ್ಯದ ಉತ್ತಮ ರೂಪಕಗಳು"

ಕಸ್ತೂರ್‌ಬಾ ಗಾಂಧಿ

(ಮೂರನೆ ಮಗ ರಾಮದಾಸ್‌ನ ಮದುವೆ
ಸಂದರ್ಭದಲ್ಲಿ ಸೊಸೆಗೆ ಹೇಳಿದ ಮಾತು)

"ನೀವು ನಿರೀಕ್ಷಿಸುವುದಕ್ಕಿಂತ ಹೆಚ್ಚಾಗಿ ತ್ಯಾಗ ಮಾಡಬಲ್ಲೆ, ಬೇಕಾದರೆ ಪ್ರಾಣವನ್ನೇ ಸಮರ್ಪಿಸಬಲ್ಲೆ. ನೀವೊಬ್ಬರು ಆದರ್ಶವಾದಿಗಳು ಸಾರ್ವಜನಿಕ ವ್ಯಕ್ತಿಗಳು, ಜನೋದ್ಧಾರಕ್ಕೆ ದೇಶೋದ್ಧಾರಕ್ಕೆಂದೇ ನೀವು ಹುಟ್ಟಿರಬೇಕು ಎನಿಸುತ್ತದೆ. ನಿಮ್ಮೆಲ್ಲಾ ವಿಚಾರಗಳಿಗೆ ಸಹಮತಳಾಗುತ್ತಾ ಹೋಗುವುದೇ ನನ್ನ ಕರ್ತವ್ಯ. ನೀವೆಲ್ಲಾ ಹೋರಾಟಗಳಲ್ಲಿ ಸಮಭಾಗಿಯಾಗಿ ಪಾಲ್ಗೊಳ್ಳುವೆ".

ಕಸ್ತೂರ್‌ಬಾ ಗಾಂಧಿ

(ಮಹಾತ್ಮ ಜೀ ಅವರಿಗೆ ನೀಡಿದ ಆಶ್ವಾಸನೆ)

"ಭಾರತೀಯ ಸ್ವಾತಂತ್ರ್ಯ"ವೆಂದರೆ ಜನತೆಯ ಆಳಿಕೆ, ನ್ಯಾಯಬದ್ಧವಾದ ಆಳಿಕೆ, ಪೂರ್ಣ ಸ್ವಾತಂತ್ರ್ಯವೆಂದರೇನೆಂಬ ಬಗೆಗೆ ಯಾವ ತಪ್ಪು ಗ್ರಹಿಕೆಯೂ ಆಗದಿರಲಿ. ದುಡಿಯುತ್ತಿರುವ ಲಕ್ಷಾಂತರ ಜನತೆಗೆ ಆರ್ಥಿಕ ಸ್ವಾತಂತ್ರ್ಯ ಸಿಗುವುದೇ ಪೂರ್ಣ ಸ್ವಾತಂತ್ರ್ಯ.

ನಿಜವಾದ ಕಲೆಯು ಬಾಹ್ಯವನ್ನಷ್ಟೇ ಅಲ್ಲದೇ ಆಂತರ್ಯವನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳುವುದು. ನಾಶಮಾಡುವ ಕಲೆ ಇದ್ದಂತೆ ಜೀವದಾನಮಾಡುವ ಕಲೆಯೂ ಇದೆ. ನಿಜವಾದ ಕಲೆಯು ಕಲಾಕಾರನಲ್ಲಿರುವ ಸುಖ, ಸಮಾಧಾನ, ಮತ್ತು ಪಾವಿತ್ರ್ಯಗಳಿಗೆ ಸಾಕ್ಷಿಯಾಗಿರುತ್ತದೆ.

– ಮಹಾತ್ಮ ಗಾಂಧೀಜಿ

ಕರ್ನಾಟಕ ಗಾಂಧೀ ಸ್ಮಾರಕ ನಿಧಿ
ಗಾಂಧೀ ಭವನ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು